# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1879 (2133)
2. ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ : 25-03-2021
4. ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದ ಜೆ.ಪಿ. ನಗರದ ಜೆ.ಡಿ ಮರ ಸಿಗ್ನಲ್ (ವೇಗಾಸಿಟಿ ಮಾಲ್) ನಿಂದ ಬನ್ನೇರುಘಟ್ಟಕ್ಕೆ ಹೋಗುವ ಮೆಟ್ರೋ ಕಾಮಗಾರಿಯು ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾಮಗಾರಿಯನ್ನು ಪೂರ್ಣಗೊಳಿಸಲು ಕೈಗೊಂಡಿರುವ ಕ್ರಮಗಳೇನು? | ಬೆಂಗಳೂರು ಮೆಟ್ರೋ ರೈಲ್ ಯೋಜನೆ ಹಂತ-2ರ ರೀಚ್-6 (ಎಲಿವೇಟೆಡ್) ಕಾಳೇನ ಅಗ್ರಹಾರದಿಂದ ತಾವರೆಕೆರೆಯವರೆಗೆ 7.5 ಕಿ.ಮೀ.ಗಳ ಕಾಮಗಾರಿಯು ಸ್ಥಗಿತಗೊಂಡಿದೆ. ಸದರಿ ಕಾಮಗಾರಿಯನ್ನು ಮೆ\|\| ಸಿಂಪ್ಲೆಕ್ಸ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವಹಿಸಲಾಗಿತ್ತು. ಈ ಕರಾರಿನ ಪ್ರಕಾರ ಕಾಮಗಾರಿಯನ್ನು ದಿನಾಂಕ:30.08.2020ರ ವೇಳೆಗೆ ಪೂರ್ಣಗೊಳಿಸಬೇಕಾಗಿತ್ತು. ಆದರೆ ಗುತ್ತಿಗೆದಾರರು ಜನವರಿ-2021ರ ಅಂತ್ಯಕ್ಕೆ ಕೇವಲ ಶೇ. 33% ರಷ್ಟು ಮಾತ್ರ ಪ್ರಗತಿ ಸಾಧಿಸಿದ್ದರಿಂದ ಗುತ್ತಿಗೆಯನ್ನು ರದ್ದು ಮಾಡಲಾಗಿರುತ್ತದೆ. ಪ್ರಸ್ತುತ ನಿಯಮಾನುಸಾರ ಮರು ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| ಆ) | ಬನ್ನೇರುಘಟ್ಟ ರಸ್ತೆಯ ಮೆಟ್ರೋ ಕಾಮಗಾರಿಯನ್ನು ಯಾವ ಕಂಪನಿಗೆ ಗುತ್ತಿಗೆ ನೀಡಲಾಗಿದೆ; ಕರಾರಿನಂತೆ ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗಧಿಪಡಿಸಿರುವ ದಿನಾಂಕ ಯಾವುದು; ಸದರಿ ಕಾಮಗಾರಿ ವಿಳಂಬಕ್ಕೆ ಕಾರಣವೇನು? (ವಿವರವನ್ನು ನೀಡುವುದು) | |

ಕಡತ ಸಂಖ್ಯೆ: ನಅಇ 83 ಪಿ.ಆರ್.ಜೆ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿಗಳು